# ಶಾಲಾ ಗ್ರಂಥಾಲಯಗಳ ಮೂಲಕ ಭಾಷೆ ಮತ್ತು ಸಾಕ್ಷರತೆಯ ಅಭಿವೃದ್ಧಿಯನ್ನು ಉತ್ತೇಜಿಸುವುದು

ಮಕ್ಕಳಿಗೆ ಪುಸ್ತಕಗಳ ಪ್ರವೇಶ ನೀಡುವುದರಿಂದ ಅವರ ಭಾಷಾ ಕಲಿಕೆ ಮತ್ತು ಸಾಕ್ಷರತೆಯ ಬೆಳವಣಿಗೆಯ ಮೇಲೆ ಹೆಚ್ಚಿನ ಪರಿಣಾಮ ಬೀರುತ್ತದೆ ಎಂಬುದಕ್ಕೆ ಸಾಕಷ್ಟು ಪುರಾವೆಗಳಿವೆ. ಶಾಲಾ ಗ್ರಂಥಾಲಯವು ಕೇವಲ ಭಾಷಾ ಬೆಳವಣಿಗೆಯನ್ನು ಉತ್ತೇಜಿಸುವುದಕ್ಕಿಂತ ಹೆಚ್ಚಿನದನ್ನು ಮಾಡುತ್ತದೆ ಎಂದು ಹೇಳಲಾಗುತ್ತದೆ. ಶಾಲಾ ಗ್ರಂಥಾಲಯವು 'ಸಮುದಾಯದ' ಎಲ್ಲಾ ಸದಸ್ಯರನ್ನು - ಶಿಕ್ಷಕರು , ವಿದ್ಯಾರ್ಥಿಗಳು ಅಥವಾ ಪೋಷಕರನ್ನು - ಇದು ತಮ್ಮ ಗ್ರಂಥಾಲಯ ಎಂದು ಭಾವಿಸುವ ಸಮುದಾಯದ ಸ್ಥಳವಾಗಿ ಬದಲಾಗಬಹುದು. ಮಕ್ಕಳು ಮತ್ತು ಶಿಕ್ಷಕರು ಭೇಟಿಯಾಗಲು, ಸಹಯೋಗಿಸಲು, ಸಂಶೋಧನೆ ಮಾಡಲು, ಕಲಿಯಲು, ಹಂಚಿಕೊಳ್ಳಲು ಮತ್ತು ವಿಶ್ರಾಂತಿ ಪಡೆಯಲು ಇದು ಸಾಮಾಜಿಕ ಸ್ಥಳವಾಗಿದೆ. ಆದಾಗ್ಯೂ, ಈ ಹ್ಯಾಂಡ್ ಔಟ್ ನಲ್ಲಿ , ಭಾಷೆ ಮತ್ತು ಸಾಕ್ಷರತೆಯ ಅಭಿವೃದ್ಧಿಯನ್ನು ಉತ್ತೇಜಿಸಲು ನಾವು ಶಾಲಾ ಗ್ರಂಥಾಲಯದ ಮೇಲೆ ಮಾತ್ರ ಕೇಂದ್ರೀಕರಿಸುತ್ತೇವೆ.

ಅದನ್ನು ಹೇಳಿದ ನಂತರ, ಅವರು ಅರ್ಥಮಾಡಿಕೊಳ್ಳಬಹುದಾದಂತಹ ಆಸಕ್ತಿದಾಯಕ ಪುಸ್ತಕಗಳಿಗೆ ಪ್ರವೇಶ ಹೊಂದಿರುವಾಗ, ಹೆಚ್ಚಿನ ವಿದ್ಯಾರ್ಥಿಗಳು ಅವುಗಳನ್ನು ಓದುತ್ತಾರೆ ಎಂಬುದು ಎಲ್ಲರಿಗೂ ತಿಳಿದಿದೆ ಮತ್ತು ಇದರಿಂದ ಅವರ ಶಬ್ದಕೋಶ, ವ್ಯಾಕರಣ, ಬರವಣಿಗೆಯ ಶೈಲಿ ಮತ್ತು ಪ್ರಾಪಂಚಿಕ ಜ್ಞಾನವು ಸುಧಾರಿಸುತ್ತದೆ (ಕ್ರಾಶೆನ್, 2014).

ಆದಾಗ್ಯೂ, ಮಕ್ಕಳಿಗೆ ಸುಲಭವಾಗಿ ಅರ್ಥಮಾಡಿಕೊಳ್ಳಲು ಉತ್ತಮ ಗುಣಮಟ್ಟದ ಮತ್ತು ಆಸಕ್ತಿದಾಯಕ ಪುಸ್ತಕಗಳಿಗೆ ಪ್ರವೇಶವನ್ನು ನೀಡುವುದು ಶಿಕ್ಷಕರ ಕೆಲಸದ ಒಂದು ಭಾಗ ಮಾತ್ರ. ಒಳ್ಳೆಯ ಭಾಷಾ ಶಿಕ್ಷಕರು ಮತ್ತು ಗ್ರಂಥಪಾಲಕರು ಕೇವಲ ಪುಸ್ತಕಗಳನ್ನು ಓದುಗರ ಬಳಿ ತರುವುದಲ್ಲ , ಓದುಗರನ್ನು ಪುಸ್ತಕಗಳ ಬಳಿ ತರಬೇಕು. ಅವರು ಮಕ್ಕಳಲ್ಲಿ ಓದುವ ಪ್ರೀತಿಯನ್ನು ಬೆಳೆಸಬೇಕು ಮತ್ತು ಓದುವ ಹವ್ಯಾಸವನ್ನು ಬೆಳೆಸಿಕೊಳ್ಳಲು ಸಹಾಯ ಮಾಡಬೇಕು. ಅವರು ಪುಸ್ತಕಗಳನ್ನು ಓದುವ ಮೂಲಕ ಓದುವ ಕೌಶಲ್ಯಗಳನ್ನು ಮತ್ತು ಯೋಚಿಸುವ ಶಕ್ತಿಯನ್ನು ಬೆಳೆಸಲು ಮಕ್ಕಳಿಗೆ ಸಹಾಯ ಮಾಡಬೇಕಾಗುತ್ತದೆ. ಭಾಷಾ ತರಗತಿಯಲ್ಲಿ ಪಠ್ಯವನ್ನು ಅರ್ಥಮಾಡಿಕೊಳ್ಳಲು ಈ ಕೌಶಲ್ಯಗಳು ಸಹಾಯ ಮಾಡಬಹುದು. ಗ್ರಂಥಾಲಯದಲ್ಲಿ, ಶಿಕ್ಷಕರು ತಾವು ಓದುತ್ತಿರುವ ಪಠ್ಯದ ಬಗ್ಗೆ ಮಕ್ಕಳಿಗೆ ಯೋಚಿಸಲು ಮತ್ತು ಸಂಪರ್ಕಿಸಲು, ಪ್ರಶ್ನಿಸಲು, ವಿಮರ್ಶಾತ್ಮಕವಾಗಿ ವಿಶ್ಲೇಷಿಸಲು ಹಾಗೂ ಪಠ್ಯಕ್ಕೆ ಕಲಾತ್ಮಕವಾಗಿ ಪ್ರತಿಕ್ರಿಯಿಸಲು, ತದನಂತರ ಓದು ಮತ್ತು ಬರವಣಿಗೆಯನ್ನು ತಮ್ಮ ಜೀವನಕ್ಕೆ ಅನ್ವಯಿಸುವುದನ್ನು ಕಲಿಸಬಹುದು.

ಈ ಹ್ಯಾಂಡ್ ಔಟ್ ಅನ್ನು ಈಗಾಗಲೇ ಗ್ರಂಥಾಲಯಕ್ಕೆ ಪ್ರವೇಶವನ್ನು ಹೊಂದಿರುವ ಭಾಷಾ ಶಿಕ್ಷಕರಿಗೆ ಮತ್ತು ಗ್ರಂಥಪಾಲಕರಿಗಾಗಿ ಗ್ರಂಥಾಲಯವನ್ನು ಹೇಗೆ ಇನ್ನೂ ಉತ್ತಮವಾಗಿ ಬಳಸಬಹುದು ಎಂದು ತಿಳಿಯಬಯಸುವವರಿಗಾಗಿ ವಿನ್ಯಾಸಗೊಳಿಸಲಾಗಿದೆ. ವಿವಿಧ ವಯೋಮಾನದವರಿಗೆ ಗ್ರಂಥಾಲಯವನ್ನು ಉನ್ನತಿಕರಿಸಲು ಇಲ್ಲಿ ನಾವು ಚಟುವಟಿಕೆಗಳನ್ನು ಸೂಚಿಸಿದ್ದೇವೆ. ಗ್ರಂಥಾಲಯವನ್ನು ಸ್ಥಾಪಿಸಲು ಮತ್ತು ಮುಕ್ತ ಗ್ರಂಥಾಲಯದ ತತ್ವಗಳನ್ನು ಅರ್ಥಮಾಡಿಕೊಳ್ಳಲು ಮಾರ್ಗಸೂಚಿಗಳಿಗಾಗಿ, ದಯವಿಟ್ಟು ಈ ದಾಖಲೆಗಳನ್ನು ನೋಡಿ

<u>ರೀಡ್ ಅಲೌಡ್ ( 3 ವರ್ಷ ಮತ್ತು ಅದಕ್ಕೂ ಹೆಚ್ಚಿನ ವಯಸ್ಸಿನವರಿಗೆ )</u>

ಉದ್ದೇಶ – ರೀಡ್ ಅಲೌಡ್ ಚಟುವಟಿಕೆಯು ಆಲಿಸುವಿಕೆ ಮತ್ತು ವೀಕ್ಷಣಾ ಕೌಶಲ್ಯಗಳನ್ನು ಅಭಿವೃದ್ಧಿಪಡಿಸಲು ಸಹಾಯ ಮಾಡುತ್ತದೆ. ಇದು ನಿರರ್ಗಳತೆಯನ್ನು ಅಭಿವೃದ್ಧಿಪಡಿಸುತ್ತದೆ ಮತ್ತು ಮಕ್ಕಳಿಗೆ ಕಥೆ ಏನೆಂಬ ಅರ್ಥವನ್ನು ನೀಡುತ್ತದೆ(ವಿವರಿಸುತ್ತದೆ).

ರೀಡ್ ಅಲೌಡ್ ಚಟುವಟಿಕೆ ಏನನ್ನು ಒಳಗೊಂಡಿರುತ್ತದೆ ಎಂಬುದರ ಬಗ್ಗೆ ಶಿಕ್ಷಕರ ಮಾದರಿಗಳು. ರೀಡ್ ಅಲೌಡ್ ಸಮಯದಲ್ಲಿ ಪ್ರಶ್ನೆಗಳನ್ನು ಕೇಳಲು ಆಗಾಗ್ಗೆ ನಿಲ್ಲಿಸುವುದರಿಂದ ಮಕ್ಕಳಿಗೆ 'ನೀವು

ಓದಿದ್ದನ್ನು ಯೋಚಿಸಲು', ಮತ್ತು ಸೂಕ್ಷ್ಮ ವ್ಯತ್ಯಾಸಗಳನ್ನು ಅರಿಯಲು ಸಹಾಯ ಮಾಡುತ್ತದೆ. ಪಠ್ಯದೊಂದಿಗೆ ವಿಮರ್ಶಾತ್ಮಕವಾಗಿ ತೊಡಗಿಸಿಕೊಳ್ಳಲು ಬೇಕಾಗಿರುವ ಎಲ್ಲಾ ಪ್ರಕ್ರಿಯೆಗಳು ಮಕ್ಕಳಿಗೆ ಅರ್ಥಮಾಡಿಕೊಳ್ಳಲು ಒಂದು ಅವಕಾಶ ಕಲ್ಪಿಸುತ್ತವೆ.

ಪ್ರಕ್ರಿಯೆ - ನೀವು ಓದುತ್ತಿರುವ ಪುಸ್ತಕವು ಸೂಕ್ತ ವಯಸ್ಸಿನವರಿಗೆ ಸರಿ ಹೊಂದುವ ರೀತಿಯಲ್ಲಿ ಆರಿಸಿ. ಇದು ಸರಳವಾದ ಸಣ್ಣ ಕಥೆ ಅಥವಾ ಅಧ್ಯಾಯದ ಪುಸ್ತಕ ಸಹ ಆಗಿರಬಹುದು.

1 ಬೇರ್ಡ್, ನಿಕೋಲಾ (2012). ಶಾಲಾ ಗ್ರಂಥಾಲಯವನ್ನು ಸ್ಥಾಪಿಸುವುದು ಮತ್ತು ನಡೆಸುವುದು. ಹೈನ್ಮನ್.

2. ಮುಕುಂದ, ಉಷಾ (2012) ತೆರೆದ ಗ್ರಂಥಾಲಯದ ಕೈಪಿಡಿ (ಅಪ್ರಕಟಿತ) - ಇವುಗಳ ಪ್ರತಿಗಳಿಗಾಗಿ ದಯವಿಟ್ಟು eli@tiss.edu ಗೆ ತಲುಪಿ.

ನಿಮ್ಮ ಮಕ್ಕಳ ಗುಂಪು, ಅವರಿಗಿಷ್ಟವಾದ ಸ್ಥಳದಲ್ಲಿ ಆರಾಮವಾಗಿ ಕುಳಿತುಕೊಳ್ಳಲಿ. ಅದು ಗ್ರಂಥಾಲಯದ ಒಳಗೆ ಅಥವಾ ನಿಮ್ಮ ಶಾಲೆಯ ಆವರಣದ ಮರದ ನೆರಳಿನಲ್ಲಿರಬಹುದು.

ಅವರೊಂದಿಗೆ ಕಥೆಯನ್ನು ಓದುವುದರಲ್ಲಿ ನೀವು ಎಷ್ಟು ಉತ್ಸಾಹಭರಿತರಾಗಿದ್ದೀರಿ ಎಂದು ಹೇಳುವ ಮೂಲಕ ಪ್ರಾರಂಭಿಸಿ. ಪುಸ್ತಕವನ್ನು ಎತ್ತಿ ಹಿಡಿಯಿರಿ, ಶೀರ್ಷಿಕೆ, ಲೇಖಕ ಮತ್ತು ಸಚಿತ್ರಕಾರರ ಬಗ್ಗೆ ತಿಳಿಸಿ..

ಪುಸ್ತಕದ ಮುಖಪುಟವನ್ನು ನೋಡಲು ಸ್ವಲ್ಪ ಸಮಯ ಕೂಡಿ ಮತ್ತು ಅವರಿಗೆ ಈ ರೀತಿಯ ಪ್ರಶ್ನೆಗಳನ್ನು ಕೇಳಿ -

ಈ ಪುಸ್ತಕ ಯಾವುದರ ಬಗ್ಗೆ ಇರಬಹುದು ಎಂದು ನೀವು ಯೋಚಿಸುತ್ತೀರಿ?

ಶೀರ್ಷಿಕೆ ಏನು ಸೂಚಿಸುತ್ತದೆ?

ಇದು ಯಾರ ಬಗ್ಗೆ ಇರಬಹುದು ಎಂದು ನೀವು ಯೋಚಿಸುತ್ತೀರಿ?

ಇದು ಸಂತೋಷದ ಕಥೆ ಅಥವಾ ದುಃಖದ ಕಥೆ ಇರಬಹುದು ಎಂದು ನೀವು ಯೋಚಿಸುತ್ತೀರಾ ?

ನೀವೇಕೆ ಆ ರೀತಿ ಯೋಚಿಸುತ್ತೀರಾ ?

ನೀವು ಕಥೆಯನ್ನು ಓದುವಾಗ, ನಿಲ್ಲಿಸಿ ಮತ್ತು ಪ್ರತಿಬಿಂಬಿಸಿ. ನಂತರ ಈ ಪ್ರಶ್ನೆಗಳನ್ನು ಕೇಳಿ-

ಮುಂದೆ ಏನಾಗುತ್ತದೆ ಎಂದು ನೀವು ಯೋಚಿಸುತ್ತೀರಿ?

ಈ ಪಾತ್ರಗಳ ಬಗ್ಗೆ ನಿಮ್ಮ ಅಭಿಪ್ರಾಯವೇನು?

ಈಗ ಏನಾಯಿತು ಎಂಬುದಕ್ಕೆ ನೀವು ನಿಮ್ಮ ಜೀವನಕ್ಕೆ ಸಂಬಂಧಿಸಿಕೊಳ್ಳಬಹುದೇ?

ನೀವು ಅಂತಹ ಪರಿಸ್ಥಿತಿಯಲ್ಲಿದ್ದರೆ ಏನು ಮಾಡುತ್ತೀರಿ?

ನೀವು ಕಥೆಯ ಕೊನೆಗೆ ಬಂದಾಗ , ಮತ್ತೊಂದು ಚರ್ಚೆಗಾಗಿ ನಿಲ್ಲಿಸಿ. ಹೆಚ್ಚಿನ ಕಥೆಗಳು ಸಸ್ಪೆನ್ಸ್ ಅನ್ನು ಸೃಷ್ಟಿಸುತ್ತವೆ. ಕಥೆ ಹೇಗೆ ಕೊನೆಗೊಳ್ಳುತ್ತದೆ ಎಂದು ಊಹಿಸಲು ಮಕ್ಕಳನ್ನು ಕೇಳಿ ಮತ್ತು ಸಸ್ಪೆನ್ಸ್ ಅನ್ನು ಜೀವಂತವಾಗಿರಿಸಿಕೊಳ್ಳಿ.

ನೀವು ಕಥೆಯ ಅಂತ್ಯವನ್ನು ಓದಿದ ನಂತರ, ಅವರು ಏನಾದರೂ ಲೇಖಕರಾಗಿದ್ದರೆ ಅದನ್ನು ಹೇಗೆ ಕೊನೆಗೊಳಿಸುತಿದ್ದರು ಎಂದು ಮತ್ತೆ ಕೇಳಿ. ಕಥೆಯ ಬಗ್ಗೆ ಅವರು ಹೇಗೆ ಭಾವಿಸಿದರು ಎಂದು ಕೇಳಿ. ಅವರು ಯಾವುದಾದರು ಪಾತ್ರಗಳಿಗೆ ಸಂಪರ್ಕ(ಸಮಾನ ಪಾತ್ರಗಳನ್ನು ನೋಡಿರುವಿರುವ ಬಗ್ಗೆ) ಹೊಂದಿದ್ದಾರೆಯೇ ಕೇಳಿ ?

ಎಲ್ಲಾ ಮಕ್ಕಳು ಉತ್ಸಾಹಭರಿತರಾಗಿಲ್ಲದೆ ಇರಬಹುದು, ತಾಳ್ಮೆಯ ಕೇಳುಗರಾಗಿರಬಹುದು. ಕೆಲವೊಮ್ಮೆ, ಮಕ್ಕಳು ಸ್ಪರ್ಶಕ(ಸಂದರ್ಭಕ್ಕೆ ವಿರುದ್ದವಾದ)ದಿಂದ ಹೊರ ಹೋಗಿ ಅಪ್ರಸ್ತುತ ಪ್ರಶ್ನೆಗಳನ್ನು ಕೇಳಬಹುದು . ನಾವು ತಾಳ್ಮೆಯಿಂದಿರಬೇಕು ಆದ್ದರಿಂದ ಅವರು ನಿಧಾನವಾಗಿ ಅಧಿವೇಶನಗಳನ್ನು ಆನಂದಿಸಲು ಪ್ರಾರಂಭಿಸುತ್ತಾರೆ. ಟೀಕೆಗಳನ್ನು ತಳ್ಳಿಹಾಕುವಂತಿಲ್ಲ. ಬದಲಾಗಿ, ಅಂತಹ ಮಕ್ಕಳನ್ನು ನೀವು ರೀಡ್ ಅಲೌಡ್ ಮಾಡಬಹುದಾದ ಪುಸ್ತಕ ಆಯ್ಕೆ ಮಾಡಲು ಕೇಳಿ. ಅವರು ಯಾವ ವಿಷಯಗಳು ಅಥವಾ ಪ್ರಕಾರಗಳನ್ನು ಆನಂದಿಸುತ್ತಾರೆ ಎಂಬುದನ್ನು ಸಹ ನೀವು ಕಂಡುಹಿಡಿಯಿರಿ ಮತ್ತು ಇದರಿಂದ ಅವರು ಚಟುವಟಿಕೆಯನ್ನು ಇಷ್ಟಪಡಲು ಪ್ರಾರಂಭಿಸುತ್ತಾರೆ .

ಎಲ್ಲಾ ಮಕ್ಕಳು ಉತ್ಸಾಹಭರಿತರಾಗಿಲ್ಲದೆ ಇರಬಹುದು, ತಾಳ್ಮೆಯ ಕೇಳುಗರಾಗಿರಬಹುದು. ಕೆಲವೊಮ್ಮೆ, ಮಕ್ಕಳು ಸ್ಪರ್ಶಕ(ಸಂದರ್ಭಕ್ಕೆ ವಿರುದ್ದವಾದ)ದಿಂದ ಹೊರ ಹೋಗಿ ಅಪ್ರಸ್ತುತ ಪ್ರಶ್ನೆಗಳನ್ನು ಕೇಳಬಹುದು . ನಾವು ತಾಳ್ಮೆಯಿಂದಿರಬೇಕು ಆದ್ದರಿಂದ ಅವರು ನಿಧಾನವಾಗಿ ಅಧಿವೇಶನಗಳನ್ನು ಆನಂದಿಸಲು ಪ್ರಾರಂಭಿಸುತ್ತಾರೆ. ಟೀಕೆಗಳನ್ನು ತಳ್ಳಿಹಾಕುವಂತಿಲ್ಲ. ಬದಲಾಗಿ, ಅಂತಹ ಮಕ್ಕಳನ್ನು ನೀವು ರೀಡ್ ಅಲೌಡ್ ಮಾಡಬಹುದಾದ ಪುಸ್ತಕ ಆಯ್ಕೆ ಮಾಡಲು ಕೇಳಿ. ಅವರು ಯಾವ ವಿಷಯಗಳು ಅಥವಾ ಪ್ರಕಾರಗಳನ್ನು ಆನಂದಿಸುತ್ತಾರೆ ಎಂಬುದನ್ನು ಸಹ ನೀವು ಕಂಡುಹಿಡಿಯಿರಿ ಮತ್ತು ಇದರಿಂದ ಅವರು ಚಟುವಟಿಕೆಯನ್ನು ಇಷ್ಟಪಡಲು ಪ್ರಾರಂಭಿಸುತ್ತಾರೆ .

ವಿಸ್ತರಣೆಯ ಐಡಿಯಾಗಳು -

ಮಕ್ಕಳಿಗೆ ನೀವು ಓದಿದ ಕಥೆಗೆ ನಾಟಕ ಮಾಡಲು ಬಯಸುತ್ತಾರ ವಿಚಾರಿಸಿ . ಕಥೆಯನ್ನು ಚರ್ಚಿಸಿ ಮತ್ತು ಗುಂಪಾಗಿ ಸ್ಕ್ರಿಪ್ಟ್‌ನೊಂದಿಗೆ ಬನ್ನಿ. ಪಾತ್ರಗಳನ್ನು ಆರಿಸಲು ಚೀಟಿಗಳನ್ನು ಬಳಸಿ. ವೇಷಭೂಷಣ ವಿನ್ಯಾಸ, ಮುಖವಾಡ ತಯಾರಿಕೆ ಮತ್ತು ಒಟ್ಟಾರೆ ನಿರ್ದೇಶನದಲ್ಲಿ ಮಕ್ಕಳನ್ನು ತೊಡಗಿಸಿಕೊಳ್ಳಿ.

ಕೆಲವು ಸೆಷನ್‌ಗಳ ನಂತರ, ಮಕ್ಕಳು ಚಟುವಟಿಕೆಯನ್ನು ಆನಂದಿಸಲು ಪ್ರಾರಂಭಿಸಿದಾಗ , ಅವರಿಗೆ ತಿರುವುಗಳನ್ನು (ಟರ್ನ್) ಪಡೆದುಕೊಳ್ಳಲು ಕೇಳಿ ಮತ್ತು ರೀಡ್ ಅಲೌಡ್ ಚಟುವಟಿಕೆಯನ್ನೂ ಸಹ ಮಾಡಿ.

ನೀವು ರೀಡ್ ಅಲೌಡ್ ಚಟುವಟಿಕೆಯನ್ನು ಮಾಡಿದ ಪುಸ್ತಕಗಳನ್ನು ಪುನಃ ಓದಲು ಮತ್ತು ಪುಸ್ತಕದ ಬಗ್ಗೆ ಮಾತುಕತೆ ನಡೆಸುವಂತೆ ಮಕ್ಕಳಿಗೆ ಪ್ರೋತ್ಸಾಹಿಸಿ, ಅಲ್ಲಿ ಅವರು ಓದಿದ ಪುಸ್ತಕದ ಅನುಭವವನ್ನು ಶಾಲೆಯಲ್ಲಿ ಹೆಚ್ಚಿನ ಪ್ರೇಕ್ಷಕರೊಂದಿಗೆ ಹಂಚಿಕೊಳ್ಳುತ್ತಾರೆ.

ನೀವು ಈ ಅವಧಿಗಳಲ್ಲಿ ಓದಿದ ಕಥೆಗಳಿಗೆ ಸಂಬಂಧಿಸಿದ ರಸಪ್ರಶ್ನೆ ಕಾರ್ಯಕ್ರಮ ನಡೆಸಿ.

**<u>ಕಥೆ ಹೇಳುವುದು – (ಎಲ್ಲಾ ವಯಸ್ಸಿನವರಿಗೆ)</u>**

ಉದ್ದೇಶ - ಕಥೆ ಹೇಳುವುದು, ಅನೇಕ ಸಂಸ್ಕೃತಿಗಳ ಒಂದು ಪ್ರಮುಖ ಭಾಗವಾಗಿದೆ: ಇದು ಒಂದು ಪೀಳಿಗೆಯಿಂದ ಇನ್ನೊಂದು ಪೀಳಿಗೆಗೆ ಕಥೆಗಳನ್ನು ಸಾಗಿಸಲು ಅನುವು ಮಾಡಿಕೊಡುತ್ತದೆ. ತರಗತಿಯಲ್ಲಿಯೂ ಸಹ, ಕಥೆ ಹೇಳುವಿಕೆಯಲ್ಲಿ ಭಾಗವಹಿಸುವವರು ಕಥೆಗಳೊಂದಿಗೆ ಸಂಪರ್ಕ ಬೆಳೆಸಿಕೊಂಡಾಗ ಅವರಲ್ಲಿ ಅದೊಂದು ಸಂಬಂಧವನ್ನು ಗಟ್ಟಿಗೊಳ್ಳುತ್ತದೆ.

ಪ್ರಕ್ರಿಯೆ - ಈ ಚಟುವಟಿಕೆಯನ್ನು ಹಲವು ವಿಧಗಳಲ್ಲಿ ನಡೆಸಬಹುದು. ನಿಮಗೆ ಬೇಕಾಗಿರುವುದು ಎಂದರೆ ಒಳ್ಳೆಯ ಕಥೆ, ಶಿಕ್ಷಕ / ಗ್ರಂಥಪಾಲಕ / ಸಮುದಾಯದ ಸದಸ್ಯರಿಂದ ಸ್ವಲ್ಪ ಉತ್ಸಾಹ ಮತ್ತು ಸಿದ್ಧತೆಯ ಪ್ರೋತ್ಸಾಹ ದೊರೆಯುತ್ತದೆ. ಪ್ರೇಕ್ಷಕರು ಅದನ್ನು ಆನಂದಿಸಿ ಪ್ರೋತ್ಸಾಹಿಸಿದಾಗ, ಮಕ್ಕಳು ಇನ್ನೂ ಸಕ್ರಿಯವಾಗಿ ಭಾಗವಹಿಸಲು ಬಯಸುತ್ತಾರೆ.

ಮಕ್ಕಳನ್ನು ಅವರ ಕುಟುಂಬಗಳಿಂದ ಕಥೆಗಳನ್ನು ಸಂಗ್ರಹಿಸಿ ಗ್ರಂಥಾಲಯಕ್ಕೆ ತರಲು ಹೇಳಿ. ನೀವು ಇದರಲ್ಲಿ ಸಮುದಾಯವನ್ನು ಸೇರಿಸಿಕೊಂಡು ಚಟುವಟಿಕೆ ಮಾಡಬಹುದು. ಬರೆಯಬಲ್ಲ ಮಕ್ಕಳಿಗೆ ಬರವಣಿಗೆಯನ್ನು ಬೆಂಬಲಿಸಲು ಇದೊಂದು ಉತ್ತಮ ಅವಕಾಶ. ಬರೆಯಲು ಸಾಧ್ಯವಾಗದವರಿಗೆ ವಯಸ್ಕ ಅಥವಾ ದೊಡ್ಡ ಮಗು ಅವರಿಗೆ ಲೇಖಕರಾಗಿ ಕೆಲಸ ಮಾಡಬಹುದು. ಒಮ್ಮೆ ನಿಮ್ಮ ಕೈಯಲ್ಲಿ ಕೆಲವು ಕಥೆಗಳನ್ನು ಹೊಂದಿದ್ದರೆ, ಮಕ್ಕಳೊಂದಿಗೆ ರಂಗಪರಿಕರಗಳು, ಬೊಂಬೆಗಳು ಮತ್ತು ಚಾರ್ಟ್‌ಗಳನ್ನು ತಯಾರಿಸಲು ಈ ಕಥೆಗಳನ್ನು ಬಳಸಬಹುದು.

<u>ಹಾಡುವುದು (3-6 ವರ್ಷ)</u>

ಉದ್ದೇಶ - ಈ ಸರಳ ಚಟುವಟಿಕೆಯು ಮಕ್ಕಳು ಗೆರೆಗಳು, ಚುಕ್ಕೆಗಳು ಅಥವಾ ಅವರು ಏನೇ ಬರೆದರೂ ಅದನ್ನು ಗುರುತಿಸಲು ಪ್ರೋತ್ಸಾಹಿಸುತ್ತದೆ! ಪೆನ್ / ಪೆನ್ಸಿಲ್ / ಬಳಪ / ಕುಂಚದೊಂದಿಗೆ ಯಾವುದೇ ಗೆಸ್ಚರ್(ಆಕೃತಿ) ಅನ್ನು ಬರವಣಿಗೆ ಎಂದು ಒಪ್ಪಿಕೊಳ್ಳುವುದರಿಂದ ಬರವಣಿಗೆಯ ಕೌಶಲ್ಯವನ್ನು ಅಭಿವೃದ್ಧಿಪಡಿಸಲು ಇದು ಸಹಾಯ ಮಾಡುತ್ತದೆ ಮತ್ತು ಮಕ್ಕಳಲ್ಲಿ ಆತ್ಮವಿಶ್ವಾಸವನ್ನು ಹೆಚ್ಚಿಸುತ್ತದೆ. ಸಮಯ ಕಳೆದಂತೆ , ಬರವಣಿಗೆಗೆ ಒಂದು ಉದ್ದೇಶವಿದೆ ಎಂದು ಅವರು ಅರ್ಥಮಾಡಿಕೊಳ್ಳುತ್ತಾರೆ. ಈ ಚಟುವಟಿಕೆಯು ಚಿಕ್ಕ ಮಕ್ಕಳಲ್ಲಿ ಉತ್ತಮವಾದ ಚಲನಾ ಕೌಶಲ್ಯಗಳನ್ನು ಸಹ ಅಭಿವೃದ್ಧಿಪಡಿಸುತ್ತದೆ.

ಪ್ರಕ್ರಿಯೆ - ಗ್ರಂಥಾಲಯದ ಪ್ರವೇಶದ್ವಾರದಲ್ಲಿ ಆಕರ್ಷಕ ಚಿತ್ರಗಳೊಂದಿಗಿನ ಕಾಗದದ ಹಾಳೆಯನ್ನು ಹಾಕಿ. ಕೆಲವು ಬಣ್ಣದ ಪೆನ್ಸಿಲ್‌ಗಳು / ಕ್ರಯೋನ್ಸ್ ಗಳು / ಸ್ಕೆಚ್-ಪೆನ್‌ಗಳು / ಹೊಳೆಯುವ ಬಣ್ಣದ ಅಂಟು / ಬಣ್ಣವನ್ನು ಸಹ ಅಲ್ಲಿ ಇರಿಸಿ. ಚಿಕ್ಕ ಮಕ್ಕಳು ಗ್ರಂಥಾಲಯಕ್ಕೆ ಪ್ರವೇಶಿಸುವಾಗ ಅವರ ಹೆಸರುಗಳನ್ನು ಸಹಿ ಹಾಕುವಂತೆ ಹೇಳಿ. ಸದಸ್ಯತ್ವಕ್ಕಾಗಿ ಇದನ್ನು ಆಚರಣೆಯನ್ನಾಗಿ(ನಿರಂತರತೆ) ಮಾಡಿ, ಮತ್ತು ವಿಭಿನ್ನ ದಿನಗಳಲ್ಲಿ ವಿಭಿನ್ನ ವಸ್ತುಗಳನ್ನುಈ ಚಟುವಟಿಕೆಗಾಗಿ ಬಳಸಿ. ಇದನ್ನು ನಿಜವಾದ ಬರವಣಿಗೆ ಎಂದು ಗುರುತಿಸಿ.

*ಆರಂಭದಲ್ಲಿ, ಮಕ್ಕಳು ಇದನ್ನು ಸ್ವಲ್ಪ ಕಷ್ಟ ಎಂದು ಕೊಳ್ಳಬಹುದು. ಅವರು ಬರೆಯುತ್ತಿರುವಂತೆ' ನಟಿಸಲು ಅವರನ್ನು ಪ್ರೋತ್ಸಾಹಿಸಿ ಮತ್ತು ಇದೇ ರೀತಿಯಾಗಿ ಇತರೆ ಮಕ್ಕಳು ಬರೆದಿರುವ 'ಬರವಣಿಗೆಯ ಉದಾಹರಣೆಗಳನ್ನು ತೋರಿಸಿ. ಕೆಲವು ಮಕ್ಕಳು ವರ್ಣಮಾಲೆಯ ಬಗ್ಗೆ ತಿಳಿದಿದ್ದರೆ, ಅವರ ಹೆಸರಿನ ಮೊದಲ ಅಕ್ಷರವನ್ನು ಬರೆದರೆ, ಅವರನ್ನೂ ಪ್ರಶಂಸಿಸಿ! ಮಗುವನ್ನು ಪ್ರತಿನಿಧಿಸುವ ರೇಖಾಚಿತ್ರ ಕೂಡ ಸಹಿಯೇ ! ಅವರು ಮಾಡುವ ಪ್ರತಿಯೊಂದು ಗುರುತು ಎಣಿಕೆಯಾಗುತ್ತದೆ ಎಂದು ಮಕ್ಕಳಿಗೆ ತಿಳಿಸಿ.*

ವಿಸ್ತರಣೆಯ ಐಡಿಯಾಗಳು -

ಗ್ರಂಥಾಲಯದ ಪ್ರವೇಶದ್ವಾರದಲ್ಲಿ ಮರಳಿನ ವರ್ಣರಂಜಿತ ಟ್ರೇ ಇರಿಸಿ ಮತ್ತು ಮರಳಿನಲ್ಲಿ ಸಹಿ ಮಾಡಲು ಮಕ್ಕಳನ್ನು ಕೇಳಿ.

ಬಣ್ಣದ ಮಡಕೆಗಳನ್ನು ಇರಿಸಿ ಮತ್ತು ಮಕ್ಕಳು ತಮ್ಮ ಬೆರಳನ್ನು ಅದರಲ್ಲಿ ಅದ್ದಿ ನಂತರ ಮರದ / ಕ್ಯಾನ್ವಾಸ್ / ಬಟ್ಟೆಯ ಬ್ಲಾಕ್ನಲ್ಲಿ ಗುರುತು ಮಾಡಲಿ.

ಪುಸ್ತಕಗಳನ್ನು ತೆಗೆದುಕೊಂಡು ಹೋಗಲು ಗ್ರಂಥಾಲಯದ ಕಾರ್ಡ್‌ಗಳನ್ನು ಮಾಡಿ ಮತ್ತು ಪ್ರತಿ ಮಗುವಿಗೆ ಅವನ / ಅವಳ ಹೆಸರು ಮತ್ತು.ಛಾಯಾಚಿತ್ರದೊಂದಿಗಿನ ಕಾರ್ಡ್ ನೀಡಿ. ಅವನು / ಅವಳು ಓದಲು ತೆಗೆದುಕೊಂಡ ಪುಸ್ತಕದ ಶೀರ್ಷಿಕೆಯನ್ನು ನಕಲಿಸಲು ಕೇಳಿ. ಶಿಕ್ಷಕರು / ಗ್ರಂಥಪಾಲಕರು ಪ್ರತ್ಯೇಕವಾಗಿ ಪ್ರತಿ ಮಗು ಆಯ್ಕೆ ಮಾಡಿದ ಪುಸ್ತಕದ ಟಿಪ್ಪಣಿಯನ್ನು ಸಹ ಅಲ್ಲಿ ಮಾಡುತ್ತಾರೆ .

ಬುಕ್‌ಮಾರ್ಕ್‌ಗಳನ್ನು ಮಾಡಿ; ಮಕ್ಕಳನ್ನು ಅದರ ಮೇಲೆ ಚಿತ್ರಿಸಲು ಹೇಳಿ.

<u>ಪದರಹಿತ ಚಿತ್ರ ಪುಸ್ತಕದೊಂದಿಗೆ ತೊಡಗಿಸಿಕೊಳ್ಳುವುದು (3 - 6 ವರ್ಷಗಳು)</u>

ಉದ್ದೇಶ – ಮಕ್ಕಳನ್ನು ಪದರಹಿತ ಚಿತ್ರ ಪುಸ್ತಕಗಳೊಂದಿಗೆ ತೊಡಗಿಸುವುದು ಒಂದು ಮೋಜಿನ ಮಾರ್ಗವಾಗಿದೆ. ಅವುಗಳನ್ನು ಬಳಸಿ, ವೀಕ್ಷಣಾ ಕೌಶಲ್ಯ, ನಿರರ್ಗಳತೆ ಮತ್ತು ಕಥೆ ಏನೆಂಬುದನ್ನು ಅರ್ಥಮಾಡಿಕೊಳ್ಳಲು ಸಹಾಯ ಮಾಡಬಹುದು. ಇದರಿಂದ ನಿಮ್ಮ ಮಕ್ಕಳ ಗುಂಪು ನಿಧಾನವಾಗಿ, ಮಾತನಾಡುವ ಸೂಕ್ಷ್ಮ ವ್ಯತ್ಯಾಸಗಳನ್ನು ಮತ್ತು ಲಿಖಿತ ಪದವನ್ನು ಅರ್ಥಮಾಡಿಕೊಳ್ಳಲೂಬಹುದು.

ಮಕ್ಕಳು ವರ್ಣರಂಜಿತ ಕಲೆಯನ್ನು ಇಷ್ಟಪಡುತ್ತಾರೆ, ಮತ್ತು ಚಿತ್ರಗಳು 'ಮಾತನಾಡುತ್ತವೆ' ಅಥವಾ ' ಕಥೆಯನ್ನು ಹೇಳುತ್ತವೆ' ಎಂದು ಅರ್ಥಮಾಡಿಕೊಳ್ಳುತ್ತಾರೆ. ಘಟನೆಗಳು, ಕಥಾವಸ್ತು ಮತ್ತು ಪಾತ್ರಗಳ ಅನುಕ್ರಮ ಮತ್ತು ಅವರ ಅಭಿವ್ಯಕ್ತಿ ಮತ್ತು ಭಾವನೆಗಳ ಕಲ್ಪನೆಯನ್ನು ಅರ್ಥಮಾಡಿಕೊಳ್ಳುತ್ತಾರೆ. ಇವು ಸಾಕ್ಷರತೆ ಮತ್ತು ಭಾಷಾ ಕಲಿಕೆಯನ್ನು ಅಭಿವೃದ್ಧಿಪಡಿಸುವ ಪ್ರಮುಖ ಕೌಶಲ್ಯಗಳಾಗಿವೆ.

ಪ್ರಕ್ರಿಯೆ - ಸಣ್ಣ ಗುಂಪುಗಳೊಂದಿಗೆ ಕೆಲಸ ಮಾಡಿ. ತಾತ್ತ್ವಿಕವಾಗಿ, ಆರರಿಂದ ಎಂಟು ಮಕ್ಕಳು ಮಾತ್ರ ನಿಮ್ಮೊಂದಿಗೆ ಪುಸ್ತಕವನ್ನು ನೋಡುತ್ತಿರಲಿ. ಈ ರೀತಿ ಮಾಡುವುದರಿಂದ ಭಾಗವಹಿಸುವ ಪ್ರತಿ ಮಗುವಿಗೆ ಸಾಕಷ್ಟು ಸಮಯ ಮತ್ತು ಗಮನವನ್ನು ನೀವು ನೀಡಬಹುದು.

ಮಕ್ಕಳೊಂದಿಗೆ ವೃತ್ತಾಕಾರದಲ್ಲಿ ಕುಳಿತುಕೊಳ್ಳಿ; ಪುಸ್ತಕವನ್ನು ಮಧ್ಯದಲ್ಲಿ ಇರಿಸಿ. ಪುಸ್ತಕದ ಬಗ್ಗೆ ನೀವು ಎಷ್ಟು ಉತ್ಸುಕರಾಗಿದ್ದೀರಿ ಎಂದು ಅವರಿಗೆ ತಿಳಿಸಿ.

ಮುಖಪುಟವನ್ನು ತೋರಿಸುವುದರೊಂದಿಗೆ ಪ್ರಾರಂಭಿಸಿ ಮತ್ತು ಅವರಿಗೆ ಈ ರೀತಿಯ ಪ್ರಶ್ನೆಗಳನ್ನು ಕೇಳಿ -

ನೀವು ಇಲ್ಲಿ ಏನು ನೋಡುತ್ತಿದ್ದೀರಿ ?

ಈ ಪುಸ್ತಕ ಯಾರ ಬಗ್ಗೆ ಇರಬಹುದು ?

ನಾವು ಪುಸ್ತಕದ ಒಳಗೆ ನಡೆಯಬಹುದಾದುದ್ದನ್ನು ನೋಡೋಣವೇ?

ನೀವು ಉತ್ಸುಕರಾಗಿದ್ದೀರಾ?

ಸಚಿತ್ರಕಾರರ ಹೆಸರನ್ನು ಉಲ್ಲೇಖಿಸಿ. ಮಕ್ಕಳು ಮೊದಲ ಬಾರಿಗೆ ಚಿತ್ರ ಪುಸ್ತಕವನ್ನು ನೋಡುತ್ತಿದ್ದರೆ, ಒಬ್ಬ ಸಚಿತ್ರಕಾರ ಯಾರು, ಅವರು ಏನು ಮಾಡುತ್ತಾರೆ ಎಂಬುದನ್ನು ಮಕ್ಕಳಿಗೆ ವಿವರಿಸಿ. ಈ ಅವಕಾಶವನ್ನು ಚಿತ್ರಿಸುವುದು ಅಥವಾ ಸುಂದರವಾದ ಚಿತ್ರಗಳನ್ನು ಮಾಡುವುದು ಹೇಗೆ ಒಂದು ಉತ್ತಮ ಕೆಲಸ ಎಂಬುದನ್ನು ಅವರಿಗೆ ಅರ್ಥೈಸಲು ಬಳಸಿ. ಅವರು ಅದನ್ನು ಹೇಗೆ ಮಾಡಬಹುದು ಎಂಬುದರ ಕುರಿತು ಮಾತನಾಡಿ. ಪ್ರತಿ ಚಿತ್ರ ಪುಸ್ತಕದೊಂದಿಗೆ, ಅವು ಹೊಂದಿರುವ ವಿಭಿನ್ನ ವಿವರಣಾ ಶೈಲಿಗಳ ಬಗ್ಗೆ ಮಾತನಾಡಿ. ನೀವು ಇದನ್ನು ಆಗಾಗ್ಗೆ ಮಾಡಿದರೆ, ಮಕ್ಕಳು ಶೀಘ್ರದಲ್ಲೇ ಕೆಲವು ಸಚಿತ್ರಕಾರರ ಶೈಲಿಗಳನ್ನು ಗುರುತಿಸಲು ಸಾಧ್ಯವಾಗುತ್ತದೆ.

ಅವರನ್ನು ಒಂದು ಬಾರಿಗೆ ಪುಸ್ತಕದ ಕೇವಲ ಒಂದು ಪುಟದ ಮೂಲಕ ಮಾತ್ರ ತೆಗೆದುಕೊಂಡು ಹೋಗಿ

ಪ್ರತಿ ಮಗುವಿಗೆ ಚಿತ್ರವನ್ನು ನೋಡಲು ಅನುಮತಿಸಿ, ಪ್ರತಿ ಮಗು ಹೇಳುವದನ್ನು ಗಮನಿಸಿ.

ಮಕ್ಕಳು ಹೇಳುವುದರ ಕುರಿತು ಸಂವಾದವನ್ನು ಪ್ರಾರಂಭಿಸಲು ಪ್ರಯತ್ನಿಸಿ. ಪ್ರತಿ ಮಗು ಏನು ತೆಗೆದುಕೊಳ್ಳುತ್ತಿದೆ ಎಂಬುದನ್ನು ಅರ್ಥಮಾಡಿಕೊಳ್ಳಲು ಇದು ನಿಮಗೆ ಸಹಾಯ ಮಾಡುತ್ತದೆ.

ಅವರು ಗಮನಿಸದೆ ಇರುವ ವಿಷಯಗಳಿಗೆ ಅವರ ಗಮನವನ್ನು ತೆಗೆದುಕೊಂಡು ಹೋಗಿ. ಉದಾಹರಣೆಗೆ ಮೋಸಗಾರನಾಗಿ ಕಾಣುವ ಯಾರಾದರೂ ಪೊದೆಗಳ ಹಿಂದೆ ಅಡಗಿರುವ ಪಾತ್ರವಾಗಿರಬಹುದು. ಇದು ಸಸ್ಪೆನ್ಸ್ ರಚಿಸಲು ಕಾಲು ಅಥವಾ ಕೈಯನ್ನು ಚಾಚಬಹುದು! ಇಲ್ಲಿ ಏನು ನಡೆಯುತ್ತಿದೆ; ಯಾರಿದು; ಅವನು / ಅವಳು ಏನು ಮಾಡುತ್ತಿದ್ದಾರೆ ? ಮುಂದೆ ಏನಾಗಲಿದೆ- ಮುಂತಾದ ಪ್ರಶ್ನೆಗಳನ್ನು ಕೇಳಿ

ಒಮ್ಮೆ ನೀವು ಪುಸ್ತಕವನ್ನು ಓದಿದ ಮೇಲೆ, ಮಕ್ಕಳು ತಿಳಿದುಕೊಂಡದ್ದನ್ನು ಸಾರಾಂಶ ಮಾಡಲು ಹೇಳಿ. ನಂತರ ನೀವು ಅದನ್ನು ಸಾರಾಂಶ ಮಾಡಿ, ನಿರೂಪಣೆ / ಕಥೆಯನ್ನು ಹೇಗೆ ನಿರ್ಮಿಸಲಾಗಿದೆ ಎಂಬುದನ್ನು ಅವರಿಗೆ ತೋರಿಸಿ.

***ಕೆಲವು ಮಕ್ಕಳು ಪುಸ್ತಕವನ್ನು ಸ್ಪರ್ಶಿಸಲು ಮತ್ತು ಅದನ್ನು ಸ್ವತಃ 'ನೋಡಲು' ಬಯಸಬಹುದು. ಇದಕ್ಕಾಗಿ ಐದು ನಿಮಿಷ ಸಮಯ ಇರಿಸಿ. ಮಕ್ಕಳು ನಮ್ಮಿಂದ ತೆಗೆದುಕೊಳ್ಳುವ ಸೂಚನೆಗಳು ಇವಾಗಿರಬೇಕು - ನಾವು ಪುಸ್ತಕವನ್ನು ಸ್ಪರ್ಶಿಸುವ ದನ್ನು ಮತ್ತು ಅನುಭವಿಸುವದನ್ನು ಎಷ್ಟು ಪ್ರಶಂಸಿಸುತ್ತೇವೆ. ಇದನ್ನು ಮಾಡುವಾಗ, ಪುಸ್ತಕವನ್ನು ಹೇಗ ನಿರ್ವಹಿಸಬೇಕು ಎಂದು ನಾವು ಅವರಿಗೆ ತೋರಿಸಬಹುದು. ನಾವೆಲ್ಲರೂ ಪುಸ್ತಕವನ್ನು ಪಡೆಯುವ ಮತ್ತು ಅದರ ಜವಾಬ್ದಾರಿಯನ್ನು ತೆಗೆದುಕೊಳ್ಳುವ ಹಕ್ಕನ್ನು ಹೊಂದಿದ್ದೇವೆ ಎಂದು ಸೂಚಿಸಿ. ಇದನ್ನು ಬಹಳ ಎಚ್ಚರಿಕೆಯಿಂದ ಮಾಡುವುದರಿಂದ, ಮಕ್ಕಳು ಭಯಭೀತರಾಗುವುದಿಲ್ಲ.(ಭಯ ಮುಕ್ತ ವಾತಾವರಣ ನಿರ್ಮಾಣವಾಗುತ್ತದೆ)***

ವಿಸ್ತರಣೆಯ ಐಡಿಯಾಗಳು -

ಮಕ್ಕಳು ಪುಸ್ತಕದಲ್ಲಿ ಹೆಚ್ಚು ಇಷ್ಟಪಟ್ಟ ಚಿತ್ರವನ್ನು ಬರೆಯಲು ಮತ್ತು ಅವುಗಳಿಗೆ ಬಣ್ಣ ಹಾಕಲು ಹೇಳಿ.

ಪುಸ್ತಕದ ಪಾತ್ರಗಳ ಮಾದರಿಗಳನ್ನು ಮಾಡಲು ಜೇಡಿಮಣ್ಣನ್ನು ಬಳಸಿ.

ಚಾರ್ಟ್ ಕಾಗದದೊಂದಿಗೆ ಪಾತ್ರಗಳ ಮುಖವಾಡಗಳನ್ನು ಮಾಡಿ; ನಂತರ ಮಕ್ಕಳ ಗುಂಪಿನೊಂದಿಗೆ ಕಥೆಯ ನಾಟಕವನ್ನು ಮಾಡಲು ಬಳಸಬಹುದು.

<u>ಪಠ್ಯದ ಅಕ್ಷರದೊಂದಿಗೆ ಚಿತ್ರ ಪುಸ್ತಕವನ್ನು ತೊಡಗಿಸಿಕೊಳ್ಳುವುದು (3 - 6 ವರ್ಷಗಳು)</u>

ಪ್ರಕ್ರಿಯೆ - ಪ್ರತಿ ಮಗು ಶುರು ಮಾಡಲು ಮೊದಲಿಗೆ ಕಡಿಮೆ ಪಠ್ಯವನ್ನು ಹೊಂದಿರುವ ಚಿತ್ರ ಪುಸ್ತಕವನ್ನು ನೀಡಿ. ಸುಮಾರು 20 ನಿಮಿಷಗಳ ಕಾಲ ಪುಸ್ತಕದ ಮುಖ ಪುಟವನ್ನು ನೋಡುವುದಕ್ಕೆ ಸ್ವಲ್ಪ ಸಮಯ ಕಳೆಯಲು ಹೇಳಿ. ಪ್ರತಿ ಚಿತ್ರವನ್ನು ನೋಡಲು ಮತ್ತು ದೃಷ್ಟಾಂತಗಳು ಏನು ಎಂದು ಹೇಳಲು ಪ್ರಯತ್ನಿಸುತ್ತಿವೆ ಎಂಬುದನ್ನು ಅರ್ಥಮಾಡಿಕೊಳ್ಳಲು ಹೇಳಿ. ನಂತರ ಪ್ರತಿ ಮಗು ಪುಸ್ತಕದಿಂದ ಚಿತ್ರಗಳನ್ನು ತೋರಿಸುವ ಮೂಲಕ ಗುಂಪಿಗೆ ಅವನ / ಅವಳ ಕಥೆಯನ್ನು ಹೇಳುತ್ತದೆ.

***ಚಿಕ್ಕ ಮಕ್ಕಳು ದೊಡ್ಡ ಗುಂಪಿನೊಂದಿಗೆ ಮಾತನಾಡುವುದಕ್ಕೆ ಕಷ್ಟ ಪಡಬಹುದು. ಮಗುವಿಗೆ ನಿಧಾನವಾಗಿ ಪ್ರೋತ್ಸಾಹಿಸುವ ಮೂಲಕ ಅವನ / ಅವಳ ಕಥೆಯನ್ನು ಹೇಳಲು ಸಹಾಯ ಮಾಡಿ. ಪ್ರತಿ ಮಗುವಿಗೆ ಅವನ / ಅವಳ ಬಗ್ಗೆ ವ್ಯಕ್ತಪಡಿಸಲು ಸಮಯ ಮತ್ತು ಸ್ಥಳವನ್ನು ನೀಡಿ. ಅವರಿಗೆ ಹೆಚ್ಚು ಒತ್ತಡ ನೀಡಬೇಡಿ; ಮಗು ಆಸಕ್ತಿಯನ್ನು ಕಳೆದುಕೊಳ್ಳಬಹುದು.***

***ಅವನು / ಅವಳು ಹೆಚ್ಚು ಆರಾಮದಾಯಕವಾದ ಭಾಷೆಯಲ್ಲಿ ಮಾತನಾಡಲು ಪ್ರೋತ್ಸಾಹಿಸಿ. ಇದು ತರಗತಿಯಲ್ಲಿ ಬಹುಭಾಷಾ ವಾತಾವರಣವನ್ನು ಬೆಂಬಲಿಸುತ್ತದೆ ಮತ್ತು ಮಗುವಿಗೆ ಅವನ / ಅವಳ ಭಾಷೆಯಲ್ಲಿ ಮಾತನಾಡುವ ವಿಶ್ವಾಸವನ್ನು ನೀಡುತ್ತದೆ.***

ವಿಸ್ತರಣೆಯ ಐಡಿಯಾಗಳು

ನಂತರ ಅದೇ ಪುಸ್ತಕವನ್ನು ಇತರ ಮಕ್ಕಳಿಗೆ ನೀಡಿ ಮತ್ತು ಇತರೆ  ಮಕ್ಕಳು ಕಥೆಯನ್ನು ಹೇಗೆ ಅರ್ಥಮಾಡಿಕೊಳ್ಳುತ್ತಾರೆ ಎಂಬುದನ್ನು ನೋಡಿ. ಆ ರೀತಿಯಲ್ಲಿ, ಚಿಕ್ಕ ಮಕ್ಕಳು ವಿಭಿನ್ನ ದೃಷ್ಟಿಕೋನಗಳಿಂದ ಐಡಿಯಾಗಳನ್ನು ಅರ್ಥಮಾಡಿಕೊಳ್ಳುತ್ತಾರೆ.

ಮಕ್ಕಳು ರೀಡ್ ಅಲೌಡ್ ಗಾಗಿ ನೋಡುತ್ತಿರುವ ಪುಸ್ತಕಗಳನ್ನು ಓದಿ. ಇಲ್ಲಿಯವರೆಗೆ, ಅವರು ಚಿತ್ರಗಳನ್ನು ನೋಡುತ್ತಿದ್ದರು ಮತ್ತು ನಿಜವಾಗಿಯೂ ಕಥೆ ಏನು ಎಂದು ಯೋಚಿಸಿರಬಹುದು. ಅದನ್ನು ಆಲಿಸುವುದರಿಂದ  ಅವರು ಕಥೆಗೆ ಎಷ್ಟು ಹತ್ತಿರವಾಗಿದ್ದಾರೆ ಎಂಬ ಅರ್ಥವನ್ನು ನೀಡುತ್ತದೆ. ಇದು ಗ್ರಂಥಪಾಲಕ / ಶಿಕ್ಷಕ ಮತ್ತು ಮಕ್ಕಳ ನಡುವಿನ ಸಂವಾದವನ್ನು ಪ್ರೋತ್ಸಾಹಿಸುತ್ತದೆ - ಮಕ್ಕಳು ಈಗಾಗಲೇ ಪುಸ್ತಕದೊಂದಿಗೆ ಪರಿಚಿತರಾಗಿದ್ದಾರೆ ಮತ್ತು ಎಚ್ಚರಿಕೆಯಿಂದ ಕೇಳಲು ಇದು ಅವರನ್ನು ಪ್ರೋತ್ಸಾಹಿಸಬಹುದು.

ಪ್ರತಿ ವಿದ್ಯಾರ್ಥಿಯು 'ಓದಿದ' ಪುಸ್ತಕಗಳ ಲಾಗ್ ಅನ್ನು ನಿರ್ವಹಿಸಿ (ಇದನ್ನು ನಟಿಸುವ ಓದುವಿಕೆ ಎಂದೂ ಕರೆಯುತ್ತಾರೆ) ಮತ್ತು ಈಗಾಗಲೇ ಗುಂಪಿಗೆ ಆರಿಸಲಾದ ಪುಸ್ತಕಗಳ ರಾಶಿಯಿಂದ ಹೆಚ್ಚಿನ ಪುಸ್ತಕಗಳನ್ನು ಆಯ್ಕೆ ಮಾಡುವಂತೆ ಅವರನ್ನು ಪ್ರೋತ್ಸಾಹಿಸಿ.

<u>ಎರವಲು ಕಾರ್ಡ್‌ಗಳನ್ನು ತಯಾರಿಸುವುದು - (5 ವರ್ಷ ಅಥವಾ ಅದಕ್ಕಿಂತ ಮೇಲ್ಪಟ್ಟು )</u>

ಉದ್ದೇಶ - ಇದು ಮಕ್ಕಳಿಗೆ ಗ್ರಂಥಾಲಯ ಪುಸ್ತಕಗಳ ಜವಾಬ್ದಾರಿಯನ್ನು ಸಾಮಾನ್ಯ ಆಸ್ತಿಯಾಗಿ ತೆಗೆದುಕೊಳ್ಳುವ ಅವಕಾಶವನ್ನು ನೀಡುತ್ತದೆ. ಇದು ಬರವಣಿಗೆಗೆ ದಾಖಲೆ ನಿರ್ವಹಿಸುವ ಉದ್ದೇಶವೊಂದಿದೆ ಎಂದು ಕಿರಿಯ ಮಕ್ಕಳಿಗೆ ಅರ್ಥಮಾಡಿಕೊಳ್ಳಲು ಸಹಾಯ ಮಾಡುತ್ತದೆ.

ಪ್ರಕ್ರಿಯೆ - ಪ್ರತಿ ಮಗುವಿಗೆ ಚಾರ್ಟ್ ಕಾಗದದ ಅರ್ಧ ಹಾಳೆಯನ್ನು ನೀಡಲಾಗುತ್ತದೆ. ಪ್ರತಿ ಮಗು ಕಾರ್ಡ್‌ನಲ್ಲಿ ವರ್ಣರಂಜಿತ ಗಡಿಯನ್ನು ಮಾಡುತ್ತದೆ ಮತ್ತು ಅವನ / ಅವಳ ಹೆಸರನ್ನು ಮೇಲ್ಭಾಗದಲ್ಲಿ ಬರೆಯುತ್ತದೆ. ನಂತರ ಬೇರೆಯವರ ಸಹಾಯದಿಂದ, ಮಗು ಮೂರು ಕಾಲಮ್‌ಗಳನ್ನು ಮಾಡುತ್ತದೆ: ಪ್ರವೇಶ ಸಂಖ್ಯೆಗೆ ಒಂದು; ಶೀರ್ಷಿಕೆಗಾಗಿ ಮತ್ತೊಂದು, ಪುಸ್ತಕವನ್ನು ಹಿಂತಿರುಗಿಸಿದಾಗ ಟಿಕ್ ಮಾಡಲು ಮೂರನೆಯದು, ಮಗು ಇನ್ನೂ ಓದದಿದ್ದರೆ, ಅವನು / ಅವಳು ಕವರ್‌ನಿಂದ ಪುಟದಿಂದ ಏನನ್ನಾದರೂ ಚಿತ್ರಿಸಬಹುದು..

***ನೀವು ಕಾರ್ಡ್‌ಗಳನ್ನು ಪ್ರತಿ ತರಗತಿಯ ಅಂತ್ಯದಲ್ಲಿ , ಗ್ರಂಥಾಲಯದಲ್ಲಿ ಇರಿಸಬಹುದು.***

***ಒಂದೊಂದು ಸಾರಿ , ಪುಸ್ತಕಗಳು ಮತ್ತು ಇತರ ಸಂಪನ್ಮೂಲಗಳ ಕಾಳಜಿ ವಹಿಸುವುದು ಏಕೆ ಮುಖ್ಯ ಎಂಬುದನ್ನು ಅವರೊಂದಿಗೆ ಚರ್ಚಿಸಿ. ಹಾನಿಗೊಳಗಾದ ಪುಸ್ತಕಗಳನ್ನು ಸರಿಪಡಿಸಲು ನೀವು ಸಮಯವನ್ನು ನೀಡಬಹುದು ಮತ್ತು ಮಕ್ಕಳನ್ನು ಇದರಲ್ಲಿ ಸೇರಿಸಿಕೊಂಡು ಒಟ್ಟಿಗೆ ಕೆಲಸ ಮಾಡಿ.***

ವಿಸ್ತರಣೆಯ ಐಡಿಯಾಗಳು - ತರಗತಿಯ ಗ್ರಂಥಾಲಯಕ್ಕಾಗಿ ದೊಡ್ಡ ಚಾರ್ಟ್ ಮಾಡಲು ಮಕ್ಕಳ ಸಹಾಯ ಪಡೆಯಿರಿ, ಅಲ್ಲಿ ಅವರು ತರಗತಿಯಿಂದ ಎರವಲು ಪಡೆದ ಪುಸ್ತಕಗಳನ್ನು ನಮೂದಿಸಬಹುದು. ಈ ಚಾರ್ಟ್ ವಿದ್ಯಾರ್ಥಿಗಳ ಹೆಸರುಗಳು, ಪುಸ್ತಕಗಳ ಶೀರ್ಷಿಕೆಗಳು, ಪ್ರವೇಶ ಸಂಖ್ಯೆ, ಎರವಲು ಪಡೆದ ದಿನಾಂಕ ಮತ್ತು ಹಿಂದಿರುಗಿಸಿದ ದಿನಾಂಕ ನಮೂದಿಸಲು ಅಂಕಣಗಳನ್ನು ಹೊಂದಿರಬಹುದು

ಸರಳ ಕಥೆಯನ್ನು ಬರೆಯಿರಿ ಅಥವಾ ಚಿತ್ರಿಸಿ (6 ವರ್ಷ ಅಥವಾ ಅದಕ್ಕಿಂತ ಮೇಲ್ಪಟ್ಟು)

ಉದ್ದೇಶ - ಈ ಚಟುವಟಿಕೆಯು ಬರವಣಿಗೆಯನ್ನು ಪ್ರೋತ್ಸಾಹಿಸುತ್ತದೆ, ಕಥೆ ಹೇಳುವ ಕೌಶಲ್ಯಗಳನ್ನು ಬೆಳೆಸಲು

ಸಹಾಯ ಮಾಡುತ್ತದೆ. ನೀವು ಕಥೆಗಳು ಅಥವಾ ಚಿತ್ರಣಗಳನ್ನು ಪರಿಶೀಲಿಸುತ್ತೀರಿ, ಅವರ ಕೆಲಸವನ್ನು ಪರಿಷ್ಕರಿಸಲು ಅವರಿಗೆ ಸಹಾಯ ಮಾಡಿ ಮತ್ತು ಅದನ್ನು ಪ್ರಕಟಿಸಿ.

ಪ್ರಕ್ರಿಯೆ - ಕಿರಿಯ ಮಕ್ಕಳಿಗಾಗಿ ಸರಳ ವಿಷಯಗಳನ್ನು ಹೊಂದಿರುವ ಚಿತ್ರ ಪುಸ್ತಕಗಳನ್ನು ಆರಿಸಿ. ಸಾಧ್ಯವಾದರೆ ಅವರ ಬರಹಗಾರರಾಗುವ ಮೂಲಕ, ಬರೆಯಲು ಬರದಿರುವ ಮಕ್ಕಳಿಗೆ ಸಹಾಯ ಮಾಡಿ.

ಕೆಲವು ಚಿತ್ರ ಪುಸ್ತಕಗಳು ಸಾಕಷ್ಟು ಕಷ್ಟಕರವಾಗಿರುತ್ತವೆ ಮತ್ತು ಅದರ ಸುತ್ತಲೂ ಕಥೆಯನ್ನು ರಚಿಸಲು ವಿದ್ಯಾರ್ಥಿಗಳು ಸಾಕಷ್ಟು ಚಿಂತನೆ ಮಾಡಬೇಕಾಗುತ್ತದೆ . ಸ್ವಲ್ಪ ದೊಡ್ಡ ವಯಸ್ಸಿನ ಮಕ್ಕಳಿಗೆ ನೀವು ಅಂತಹ ಪುಸ್ತಕಗಳನ್ನು ಆಯ್ಕೆ ಮಾಡಬಹುದು.

ನೀವು ತರಗತಿಯನ್ನು ಸಣ್ಣ ಗುಂಪುಗಳಾಗಿ ವಿಂಗಡಿಸಬಹುದು, ಮತ್ತು ಪ್ರತಿ ಗುಂಪಿಗೆ ಪುಸ್ತಕದ ಒಂದು ಭಾಗದಲ್ಲಿ ಕೆಲಸ ಮಾಡಿಸಬಹುದು. ಇದನ್ನು ಪ್ರಕಟಿಸುವ ಮೊದಲು ಸಂಕಲಿಸಬಹುದು.

***ಮಕ್ಕಳನ್ನು ತಮ್ಮ ವೇಗದಲ್ಲಿ ಕೆಲಸ ಮಾಡಲು ಅವಕಾಶ ನೀಡುವುದು ಉತ್ತಮ. ಅದನ್ನು ಪ್ರಕಟಿಸುವ ಗುರಿಯೊಂದಿಗೆ ಕೆಲಸ ಮಾಡಲು ಪ್ರೋತ್ಸಾಹಿಸಿ. ನೀವು ಪುಸ್ತಕ ಮೇಳ ಅಥವಾ ಮೇಳಗಳನ್ನು ಆಯೋಜಿಸಬಹುದು ಮತ್ತು ಅದಕ್ಕಾಗಿ ವರ್ಷವೆಲ್ಲಾ ಕೆಲಸ ಮಾಡಬಹುದು. ಅಂತಹ ಕೆಲಸದ 'ಸಂಗ್ರಹ'ವನ್ನು ಸಹ ನೀವು ಇರಿಸಿಕೊಳ್ಳಬಹುದು ಆದ್ದರಿಂದ ನೀವು ಅವರ ಕೆಲಸವನ್ನು ಗೌರವಿಸುತ್ತೀರಿ ಎಂದು ಮಕ್ಕಳಿಗೆ ತಿಳಿಯುತ್ತದೆ***

ವಿಸ್ತರಣೆಯ ವಿಚಾರಗಳು - ಮಕ್ಕಳು ತಮ್ಮದೇ ಆದ ಕಥೆಗಳನ್ನು ಬರೆಯಲು ಮತ್ತು ಚಿತ್ರಿಸಲು ಪ್ರೋತ್ಸಾಹಿಸಿ. ನೀವು ಇದನ್ನು ಬರವಣಿಗೆಯ ಯೋಜನೆಯನ್ನಾಗಿ ಮಾಡಬಹುದು. ಈ ಅವಧಿಯಲ್ಲಿ ಗುಂಪಿನ ಜೊತೆ ಕೆಲಸ ಮಾಡಿ ಮತ್ತು ಗುಂಪು ಬರೆದ ಮತ್ತು ಚಿತ್ರಿಸಿದ ಎಲ್ಲಾ ಕಥೆಗಳು ಪುಸ್ತಕದ ರೂಪದಲ್ಲಿ ಹೊರಬರಬಹುದು.

**ನಿಮ್ಮ ನೆಚ್ಚಿನ ಲೇಖಕ ಅಥವಾ ಇಲ್ಸ್ಟ್ರೇಟರ್‌ಗೆ ಬರೆಯಿರಿ (6 ವರ್ಷ ಅಥವಾ ಅದಕ್ಕಿಂತ ಮೇಲ್ಪಟ್ಟವರು )**

ಉದ್ದೇಶ-ಬರವಣಿಗೆಯ ಕೌಶಲ್ಯಗಳನ್ನು ಅಭಿವೃದ್ಧಿಪಡಿಸಲು ಮತ್ತು ಬರೆಯುವ ಪ್ರಕ್ರಿಯೆಯನ್ನು ಅರ್ಥಮಾಡಿಕೊಳ್ಳಲು ಸಹಾಯ ಮಾಡುತ್ತದೆ - ಕರಡು ರಚನೆ, ಪರಿಷ್ಕರಣೆ ಮತ್ತು ಅಂತಿಮಗೊಳಿಸುವಿಕೆ. ನಂತರ ಅವರು ತಮ್ಮ ಪತ್ರಗಳನ್ನು ಪೋಸ್ಟ್ ಸಹ ಮಾಡಬಹುದು.

ಪ್ರಕ್ರಿಯೆ - ಮಕ್ಕಳನ್ನು ತಮ್ಮ ನೆಚ್ಚಿನ ಲೇಖಕರು / ಸಚಿತ್ರಕಾರರ ಪಟ್ಟಿಯೊಂದಿಗೆ ಬರಲು ಹೇಳಿ. ವಯಸ್ಕರ ಸಹಾಯದಿಂದ ಮಕ್ಕಳು ಲೇಖಕ / ಸಚಿತ್ರಕಾರರ ಬಗ್ಗೆ ಇನ್ನಷ್ಟು ತಿಳಿದುಕೊಳ್ಳಬಹುದು. ಅವರು ತಮ್ಮ ಅಂಚೆ ವಿಳಾಸ ಅಥವಾ ಇಮೇಲ್ ಐಡಿ ಪಡೆಯಲು ಪ್ರಯತ್ನಿಸಬಹುದು. ಈ

ಚಟುವಟಿಕೆಯನ್ನು ಜೋಡಿಯಾಗಿ ಮಾಡಲು ಹೇಳಬಹುದು . ಪ್ರತಿ ಜೋಡಿ ಅವರು ಏನು ಬರೆಯಬೇಕೆಂದು ಬಯಸುತ್ತಾರೆ ಎಂಬುದನ್ನು ಚರ್ಚಿಸಬಹುದು. ಮಕ್ಕಳು ಏನನ್ನಾದರೂ ಬರೆಯಬಹುದು ಅಥವಾ ಬೇರೆ ಯಾವುದಾದರೂ ಸಣ್ಣ ಉಡುಗೊರೆಯನ್ನು ನೀಡಬಹುದು. ನಿಮ್ಮ ಗುಂಪಿಗೆ ಬರಬಹುದಾದ ಇತರ ಐಡಿಯಾಗಳನ್ನು ಅವರಿಂದ ಕೇಳಿ!

***ಕಿರಿಯ ಮಕ್ಕಳು ತಮ್ಮ ನೆಚ್ಚಿನ ಲೇಖಕರಿಗೆ ಪತ್ರ ಬರೆಯಲು ಬಯಸಬಹುದು. ನೀವು ಅವರ ಬರಹಗಾರರಾಗಬಹುದು: ಈ ಪ್ರಕ್ರಿಯೆಯ ಮೂಲಕ ಅವರನ್ನು ಕರೆದೊಯ್ಯಿರಿ ಮತ್ತು ಕಾಲಾನಂತರದಲ್ಲಿ, ಇದನ್ನು ಸ್ವಂತವಾಗಿ ಅವರೇ ಮಾಡಲು ಪ್ರೋತ್ಸಾಹಿಸಿ. ಕೆಲವು ಲೇಖಕರನ್ನು ತಲುಪಲಾಗದೇ ಇರಬಹುದು - ಉದಾಹರಣೆಗೆ, ಲೇಖಕರು ಜೀವಂತ ಇಲ್ಲದಿದ್ದರೆ. ನೀವು ಇನ್ನೂ ಅವರಿಗೆ ಪತ್ರವನ್ನು ಬರೆಯಲು ಪ್ರೋತ್ಸಾಹಿಸಬಹುದು, ಇದರಿಂದಾಗಿ ಅವರು ಲೇಖಕರಿಗೆ ಏನು ಹೇಳಬೇಕೆಂದು ಬಯಸುತ್ತಾರೂ ಅದನ್ನು ಬರೆಯುತ್ತಾರೆ.***

ವಿಸ್ತರಣೆಯ ಐಡಿಯಾಗಳು - ಇದು ಗುಂಪು ಚಟುವಟಿಕೆಯೂ ಆಗಿರಬಹುದು. ಎಲ್ಲರ ಮೆಚ್ಚಿನ ಪುಸ್ತಕದ ಲೇಖಕರಿಗೆ ತರಗತಿಯಲ್ಲಿನ ಎಲ್ಲರೂ ಸೇರಿ ಬರೆಯಬಹುದು. ಪುಸ್ತಕವನ್ನು ವಿವರವಾಗಿ ಚರ್ಚಿಸಲು ಇದು ನಿಮಗೆ ಅವಕಾಶ ನೀಡುತ್ತದೆ. ಪ್ರತಿ ಮಗುವೂ ಅವನು / ಅವಳು ಇಷ್ಟಪಡುವದನ್ನು ಕೊಡುಗೆಯಾಗಿ ನೀಡಬಹುದು. ಗುಂಪಿನಲ್ಲಿ ಅವರು ಲೇಖಕ / ಸಚಿತ್ರಕಾರನನ್ನು ಕೇಳಲು ಬಯಸುವ ಪ್ರಶ್ನೆಗಳನ್ನು ಬರೆಯಬಹುದು .

**ಸರ್ ಹಂಟ್ (ಖಜಾನೆಯ ಭೇಟೆ) - (ಯಾವುದೇ ವಯಸ್ಸಿನವರಾಗಿರಬಹುದು )**

ಉದ್ದೇಶ - ಈ ಚಟುವಟಿಕೆಯು ಮಕ್ಕಳನ್ನು ಗ್ರಂಥಾಲಯದ ಪ್ರತಿಯೊಂದು ಮೂಲೆ ಮತ್ತು ಕಪಾಟಿಗೆ ಪರಿಚಯಿಸಲು ಸಹಾಯ ಮಾಡುತ್ತದೆ. ಚಿಕ್ಕ ಮಕ್ಕಳು ಮೊದಲ ಬಾರಿಗೆ ಗ್ರಂಥಾಲಯಕ್ಕೆ ಪ್ರವೇಶಿಸಿದಾಗ, ಅದು ಅವರಿಗೆ ಆಶ್ಚರ್ಯದ ಭಾವವನ್ನು ತುಂಬುತ್ತದೆ. ಈ ಚಟುವಟಿಕೆಯು ಅದರ ಮೇಲೆ ನಿರ್ಮಿಸುತ್ತದೆ.

ಪ್ರಕ್ರಿಯೆ - ವರ್ಗವನ್ನು ಮೂರು ಅಥವಾ ನಾಲ್ಕು ಗುಂಪುಗಳಾಗಿ ವಿಂಗಡಿಸಿ. ಗುಂಪುಗಳ ಸಂಖ್ಯೆಯಷ್ಟು ಸುಳಿವುಗಳನ್ನು ರಚಿಸಿ. ಮೊದಲ ತಂಡಕ್ಕೆ ಮೊದಲ ಸುಳಿವು ನೀಡಿ. ಇದು ಮರೆಮಾಡಿದ ಎರಡನೇ ಸುಳಿವಿನ ಪುಸ್ತಕಕ್ಕೆ ಅವರನ್ನು ಕರೆದೊಯ್ಯುತ್ತದೆ. ಕೊನೆಯ ಸುಳಿವು ನಿಧಿಗೆ ಕಾರಣವಾಗುತ್ತದೆ - ಒಂದು ವಿಶೇಷ ಪುಸ್ತಕದಿಂದ ನೀವು ಕಥೆಯನ್ನು ಓದಬಹುದು ಅಥವಾ ತರಗತಿ ನೋಡುವುದಕ್ಕೊಸ್ಕರ ಚಿತ್ರ ಪುಸ್ತಕಗಳ ರಾಶಿಯನ್ನು ಇರಿಸಿ. .

ಸಣ್ಣ ಮಕ್ಕಳಿಗೆ ಸುಳಿವುಗಳು ತುಂಬಾ ಸರಳವಾಗಿರಬೇಕು. ದೊಡ್ಡ ಮಕ್ಕಳಿಗಾಗಿ, ನೀವು ಹೆಚ್ಚು ಸವಾಲಿನ ಸುಳಿವುಗಳನ್ನು ನೀಡಬಹುದು ಚಿಕ್ಕ ಮಕ್ಕಳ ಸುಳಿವುಗಳ ಕೆಲವು ಉದಾಹರಣೆಗಳೆಂದರೆ -

ಒರಿಗಮಿ ಪುಸ್ತಕಗಳನ್ನು ನೀವು ಎಲ್ಲಿ ಕಾಣಬಹುದು? ಒರಿಗಮಿ ಎಂದರೇನು ಮತ್ತು ಅದು ಎಲ್ಲಿಂದ ಪ್ರಾರಂಭವಾಯಿತು?

ನಿಂದ ವರೆಗಿನ ಪುಸ್ತಕಗಳು. ಇದರ ಬಗ್ಗೆ ಮಾಹಿತಿ ಪಡೆಯಲು, ನಿಮ್ಮ ವರ್ಣಮಾಲೆಯನ್ನು ನೀವು ತಿಳಿದುಕೊಳ್ಳಬೇಕು! ಓ() ನಂತರ ಏನು ಬರುತ್ತದೆ ಮತ್ತು ಇದನ್ನು ಈಜಿಪ್ಟ್‌ನಲ್ಲಿ ಕಾಣಬಹುದು? ಆ ಚಿತ್ರವನ್ನು ಹುಡುಕಿ.

ಸ್ವಲ್ಪ ದೊಡ್ಡ ಮಕ್ಕಳಿಗೆ -

ನಾವು ನಮ್ಮ ದೇಶ ಎಂದು ಕರೆಯುವ ಉಪಖಂಡದಲ್ಲಿ ನೀವು ಕಂಡುಕೊಳ್ಳುವ ಪಕ್ಷಿಗಳ ಪುಸ್ತಕ ಎಲ್ಲಿದೆ?

ಎರಡು ಪ್ರಮುಖ ಪಾತ್ರಗಳಾದ ಹಂದಿ ಮತ್ತು ಜೇಡ ಇರುವ ಪುಸ್ತಕವನ್ನು ನೀವು ಎಲ್ಲಿ ಕಾಣಬಹುದು?

ನಮ್ಮ ಸಂವಿಧಾನವನ್ನು ಬರೆದ ವ್ಯಕ್ತಿಯ ಬಗೆಗಿನ ಮಕ್ಕಳ ಲಿಖಿತ ಪುಸ್ತಕ?

*ಗ್ರಂಥಾಲಯದಲ್ಲಿನ ಎಲ್ಲಾ ಕಪಾಟನ್ನು ಅನ್ವೇಷಿಸಲು ಮಕ್ಕಳಿಗೆ ಅನುಮತಿಸಿ. ನಾವು ಅವರನ್ನು ನಂಬಬೇಕು ಪುಸ್ತಕಗಳೊಂದಿಗೆ ಬಿಡಬೇಕು ಮತ್ತು ಯಾವುದೇ ಬೀರುಗಳು ಅಥವಾ ಕಪಾಟನ್ನು ಲಾಕ್ ಮಾಡಬಾರದು. ಬಾಗಿಲುಗಳನ್ನು ಹೊಂದಿರುವ ಕಪಾಟಿನ ಬದಲು ತೆರೆದ ಚರಣಿಗೆಗಳನ್ನು(ಶೆಲ್ಫ್) ಹೊಂದಿರುವ ಕಪಾಟು ಅದ್ಭುತವಾಗಿರುತ್ತವೆ*

ವಿಸ್ತರಣೆಯ ಐಡಿಯಾಗಳು – ಟ್ರೆಸರ್ ಹಂಟ್ ಹುಡುಕಾಟದ ಸಮಯದಲ್ಲಿ ಮಕ್ಕಳು ಕಂಡುಕೊಂಡ ಪುಸ್ತಕಗಳನ್ನು ಪ್ರದರ್ಶಿಸಿ. ಇದು ಮಕ್ಕಳು ಇದೀಗ ಕಂಡುಹಿಡಿದ ಮತ್ತು ನೋಡಲು ಬಯಸುವ ಪುಸ್ತಕಗಳಾಗಿರಬಹುದು. ಮುಂದಿನ ಚಟುವಟಿಕೆಗಳಿಗಾಗಿ ಪುಸ್ತಕ ವಿಮರ್ಶೆ ಅಥವಾ ಪುಸ್ತಕ ಮಾತುಕತೆಯನ್ನು ಆಯೋಜಿಸಿ.

**References**


Krashen, S. (2014). Why invest in libraries. Retrieved from http://www.sdkrahen.com/content/artciles/why_invest_in_libraries.pdf

Luke, A., & Freebody, P. (1999). Further notes on the four resources model.

Clark, C. (2010). Linking school libraries and literacy. Retrieved from http://www.literacytrust.org.uk/assets/0000/5760/Linking_school_libraries_and_literacy_201 0.pdf


**Author:** Harshita V. Das[2]

**Editing**: Chetana Divya Vasudev

**Layout and Design**: Harshita V. Das

